# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1565

ಸದಸ್ಯರ ಹೆಸರು : ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 20.03.2020

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಗ್ರಾಮ ಪಂಚಾಯತಿಗಳಲ್ಲಿ ಸಿಬ್ಬಂದಿ ಹೆಚ್ಚಳದ ಬಗ್ಗೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ವಿದೇಶಿ ಪ್ರಾಯೋಜಿತ ಯೋಜನೆಗಳು ಇತರೆ ಇಲಾಖೆಗಳ ಕರ್ತವ್ಯಗಳ ಕಾರ್ಯ ಹಂಚಿಕೆಗೆ ಅನುಗುಣವಾಗಿ ಕೆಲಸ ನಿರ್ವಹಿಸಲು ಸರ್ಕಾರವು ಮಂಜೂರಾತಿ ನೀಡಿರುವ ಸರ್ಕಾರೇತರ ಸ್ಥಳೀಯ ಸಂಸ್ಥೆಗಳು ಆಯ್ಕೆ ಮಾಡುವ ವೃಂದವಾರು ಅಥವಾ ಶ್ರೇಣಿವಾರು ವಿವರ ನೀಡುವುದು;</td><td>ರಾಜ್ಯದ ಪ್ರತಿ ಗ್ರಾಮ ಪಂಚಾಯತಿಗೆ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 112 ರಡಿ ಈ ಕೆಳಕಂಡ ಹುದ್ದೆಗಳು ಮಂಜೂರಾಗಿರುತ್ತವೆ.<br><br>ಕ್ರ ಸಂ | ಸಿಬ್ಬಂದಿ ಪದನಾಮ<br>1 | ಕರ ವಸೂಲಿಗಾರ<br>2 | ಕ್ಲರ್ಕ್, ಕ್ಲರ್ಕ್ ಕಂ ಡಾಟಾ ಎಂಟ್ರಿ ಆಪರೇಟರ್<br>3 | ವಾಟರ್‌ಮೆನ್/ ಪಂಪ್ ಆಪರೇಟರ್<br>4 | ಜವಾನ<br>5 | ಸ್ವಚ್ಛತಾಗಾರ<br>6 | ಡಾಟಾ ಎಂಟ್ರಿ ಆಪರೇಟರ್</td></tr>
<tr><td>(ಆ)</td><td>ಗ್ರಾಮ ಪಂಚಾಯತಿಗಳ ಸಿಬ್ಬಂದಿಗಳ ಕಾರ್ಯ ಒತ್ತಡ ಕುರಿತು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸಿಬ್ಬಂದಿ ಹೆಚ್ಚಳದ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು;</td><td>ಬಂದಿದೆ.<br><br>ಪ್ರಸ್ತುತ ಪ್ರತಿ ಗ್ರಾಮ ಪಂಚಾಯತಿಗೆ ಒಂದು ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲಾಗಿದೆ.</td></tr>
<tr><td>(ಇ)</td><td>ಗ್ರಾಮ ಪಂಚಾಯತಿಯ ಡೇಟಾ ಎಂಟ್ರಿ ಆಪರೇಟರ್ 01 ಹುದ್ದೆಯಿಂದ ಕ್ರ.ಸಂ. 6ರಲ್ಲಿ ನಮೂದಿಸಿರುವ ಸಾರ್ವಜನಿಕ ಕೆಲಸ ಕಾರ್ಯಗಳನ್ನು ನಿಗಧಿತ ಅವಧಿಯಲ್ಲಿ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?</td><td>ಪ್ರಸ್ತುತ ಗ್ರಾಮ ಪಂಚಾಯತಿಗಳಲ್ಲಿ 1) ಬಿಲ್ ಕಲೆಕ್ಟರ್ 2) ಕ್ಲರ್ಕ್ ಕಂ ಡಾಟಾ ಎಂಟ್ರಿ ಆಪರೇಟರ್, 3) ವಾಟರ್‌ಮೆನ್ , 4) ಜವಾನ ಮತ್ತು 5) ಸ್ವಚ್ಛತಾಗಾರ ವೃಂದವು ಸೇರಿದಂತೆ ಸರಾಸರಿ 12 ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದು, ದಿನನಿತ್ಯದ ಕಾರ್ಯಗಳನ್ನು ಮಾಡುತ್ತಿರುತ್ತಾರೆ.</td></tr>
<tr><td>(ಈ)</td><td>ಗ್ರಾಮ ಪಂಚಾಯತಿಗಳು ನಿಗಧಿತ ಅವಧಿಯಲ್ಲಿ ಸೇವೆ ಒದಗಿಸುತ್ತಿವೆಯೇ; ಒದಗಿಸದಿದ್ದಲ್ಲಿ, ಹೆಚ್ಚುವರಿಯಾಗಿ ನಿಯಮಾನುಸಾರ ಗ್ರಾಮ ಪಂಚಾಯತಿ ಸಿಬ್ಬಂದಿ ನೇಮಕ ಮಾಡಿಕೊಳ್ಳಲು ಹುದ್ದೆಗಳ ಮಂಜೂರಾತಿಯನ್ನು ಸರ್ಕಾರ ನೀಡುವುದೇ? (ವಿವರ ನೀಡುವುದು)</td><td>ಹೌದು.<br><br>ಪ್ರಸ್ತುತ ಗ್ರಾಮ ಪಂಚಾಯತಿ ನೌಕರರಿಗೆ ಸಂಬಂಧಿಸಿದಂತೆ The Karnataka Gram Swaraj and Panchayat Raj (Staffing Pattern, Scales of Pay, Method of Recruitment and Conditions of Service of Employees of Grama Panchayat) Rules, 2020 ರ ಕರಡನ್ನು ದಿನಾಂಕ:29-02-2020 ರಂದು ಪ್ರಕಟಿಸಲಾಗಿದ್ದು, ಅಂತಿಮವಾಗಿ ನಿಯಮಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು.</td></tr>
</table>

ಸಂ. ಗ್ರಾಅಪ 308 ಗ್ರಾಪಂಅ 2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು